# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1308 |
| ಸದಸ್ಯರ ಹೆಸರು | : | ಶ್ರೀ ಗೋವಿಂದ ರಾಜು |
| ಉತ್ತರಿಸುವ ದಿನಾಂಕ | : | 24.12.2021. |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

<table>
<tr><th>ಕ್ರ.<br>ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ಕೋಲಾರ ಜಿಲ್ಲೆಯಲ್ಲಿ ಕಳೆದ ಮೂರು ವರ್ಷದಿಂದ ಇಲ್ಲಿಯವರೆಗೂ ಎಷ್ಟು ಫಲಾನುಭವಿಗಳು ಇದರ ಸೌಲಭ್ಯವನ್ನು ಪಡೆದಿದ್ದಾರೆ.</td><td>ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ಕೋಲಾರ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿ ಫಲಾನುಭವಿಗಳಿಗೆ ಕಳೆದ ಮೂರು ವರ್ಷಗಳಿಂದ ವಿವಿಧ ನಿಗಮದ ವತಿಯಿಂದ ಕೊಳವೆಬಾವಿ ಸೌಲಭ್ಯ ಪಡೆದ ಫಲಾನುಭವಿಗಳ ಸಂಖ್ಯೆ ಕೆಳಕಂಡಂತಿದೆ:
<table>
<tr><th>ವರ್ಷ</th><th>ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದ ಫಲಾನುಭವಿಗಳ ಸಂಖ್ಯೆ</th><th>ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮದ ಫಲಾನುಭವಿಗಳ ಸಂಖ್ಯೆ</th><th>ಕರ್ನಾಟಕ ಭೋವಿ ಅಭಿವೃದ್ಧಿ ನಿಗಮದ ಫಲಾನುಭವಿಗಳ ಸಂಖ್ಯೆ</th></tr>
<tr><td>2018-19</td><td>205</td><td>42</td><td>63</td></tr>
<tr><td>2019-20</td><td>0</td><td>0</td><td>0</td></tr>
<tr><td>2020-21</td><td>0</td><td>0</td><td>0</td></tr>
<tr><td>ಒಟ್ಟು</td><td>205</td><td>42</td><td>63</td></tr>
</table>
ಸದರಿ ಕೊಳವೆಬಾವಿಗಳನ್ನು ಕೊರೆದು, ಪಂಪ್‌ಸೆಟ್ ಹಾಗೂ ಇತರೆ ಸಾಮಾಗ್ರಿಗಳನ್ನು ಸರಬರಾಜು ಮಾಡಿ, ಅಳವಡಿಸಿ, ವಿದ್ಯುದ್ದೀಕರಣಗೊಳಿಸಲು ಒಟ್ಟಾರೆಯಾಗಿ ಒಂದೇ ಟೆಂಡರ್ ಆಹ್ವಾನಿಸಿದ್ದು, ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡಿದ್ದು, ಗುತ್ತಿಗೆದಾರರಿಗೆ ಕಾರ್ಯದೇಶ ನೀಡುವ ಹಂತದಲ್ಲಿದೆ.</td></tr>
<tr><td>ಆ)</td><td>ಈ ಯೋಜನೆಯಡಿಯಲ್ಲಿ ಅರ್ಜಿ ಸಲ್ಲಿಸಿರುವ ಎಲ್ಲಾ ರೈತರಿಗೂ ಬೋರ್‌ವೆಲ್‌ಗಳು ಮಂಜೂರಾಗಿದೆಯೇ;</td><td rowspan="2">ನಿಗಮಗಳಿಗೆ ಆಯವ್ಯಯದಲ್ಲಿ ನಿಗದಿಯಾದ ಅನುದಾನದಡಿ ಆಯಾ ಕ್ಷೇತ್ರದ ಪರಿಶಿಷ್ಟ ಜಾತಿಯ ಜನಸಂಖ್ಯೆಗೆ ಅನುಗುಣವಾಗಿ ಗುರಿ ನಿಗಧಿಪಡಿಸಲಾಗುತ್ತಿದ್ದು, ಗುರಿಗೆ ತಕ್ಕಂತೆ ಆಯ್ಕೆ ಸಮಿತಿಯಲ್ಲಿ ಅರ್ಜಿ ಸಲ್ಲಿಸಿರುವ ಫಲಾಪೇಕ್ಷಿಗಳನ್ನು ಆಯ್ಕೆ ಮಾಡಿ, ನಿಯಮಾನುಸಾರ ಕೊಳವೆಬಾವಿ ಮಂಜೂರು ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.</td></tr>
<tr><td>ಇ)</td><td>ಬೋರ್‌ವೆಲ್‌ಗಾಗಿ ಅರ್ಜಿ ಸಲ್ಲಿಸಿರುವ ಎಲ್ಲಾ ರೈತರಿಗೂ ಕೊಳವೆ ಬಾವಿ ಮಂಜೂರು ಮಾಡಲು ಯಾವ ಕ್ರಮ ಕೈಗೊಳ್ಳಲಾಗಿದೆ?</td></tr>
</table>

**ಸಂಖ್ಯೆ: ಸಕಇ 614 ಎಸ್‌ಡಿಸಿ 2021**

**(ಕೋಟ ಶ್ರೀನಿವಾಸ ಪೂಜಾರಿ)**
ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು.